# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆಸಂಖ್ಯೆ : 69
ಸದಸ್ಯರ ಹೆಸರು : ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 09.07.2018
ಉತ್ತರಿಸುವ ಸಚಿವರು : ಜಲ ಸಂಪನ್ಮೂಲ ಸಚಿವರು

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬಜಾವತ್ ಆಯೋಗದ ತೀರ್ಪಿನಂತೆ ನೀರು ಬಳಸಿಕೊಳ್ಳಲು ಮಾಂಜ್ರಾ ನದಿಯಲ್ಲಿ ಎಷ್ಟು ಬ್ಯಾರೇಜುಗಳನ್ನು ನಿರ್ಮಿಸಲಾಗಿದೆ; ಪ್ರತಿ ಬ್ಯಾರೇಜಿನ ನೀರಿನ ಸಂಗ್ರಹ ಸಾಮರ್ಥ್ಯ, ನಿರ್ಮಾಣದ ವೆಚ್ಚದ ಮಾಹಿತಿ ನೀಡುವುದು; | ಬೀದರ್ ಜಿಲ್ಲೆಯಡಿ ಗೋದಾವರಿ ಕಣಿವೆಯ ಮಾಂಜ್ರಾ ನದಿ ಪಾತ್ರದಡಿ 4.80 ಟಿ.ಎಂ.ಸಿ ನೀರಿನ ಬಳಕೆಗಾಗಿ ಕೃಷ್ಣಾ ಭಾಗ್ಯ ಜಲ ನಿಗಮದ ವತಿಯಿಂದ 4 ಸರಣಿ ಬ್ರಿಡ್ಜ್ ಕಂ ಬ್ಯಾರೇಜ್‌ಗಳನ್ನು ನಿರ್ಮಿಸಲಾಗಿದ್ದು ವಿವರಗಳು ಈ ಕೆಳಗಿನಂತಿವೆ. (see table below) |
| ಆ) | ಮೂಲ ಉದ್ದೇಶಕ್ಕೆ ಅನುಗುಣವಾಗಿ ಈ ಬ್ಯಾರೇಜುಗಳಿಂದ ನೀರಾವರಿ ನೀರು ಬಳಕೆಯಾಗುತ್ತಿದೆಯೇ? | ಮೇಲ್ಕಂಡ 4 ಸರಣಿ ಬ್ರಿಡ್ಜ್ ಕಂ ಬ್ಯಾರೇಜ್ ಕಾಮಗಾರಿಗಳನ್ನು ಈಗಾಗಲೇ ಪೂರ್ಣಗೊಳಿಸಲಾಗಿದ್ದು ಸದರಿ ಬ್ರಿಜ್ ಕಂ ಬ್ಯಾರೇಜುಗಳಡಿ ಶೇಖರಣೆಯಾಗುವ ಹಿನ್ನೀರನ್ನು ರೈತರು ತಮ್ಮ ಸ್ವಂತ ಪಂಪ್‌ಸೆಟ್ ಅಳವಡಿಸಿಕೊಂಡು ನೀರಾವರಿಗೆ ಬಳಸಿಕೊಳ್ಳುವುದಾಗಿರುತ್ತದೆ. ಈ ನಿಟ್ಟಿನಲ್ಲಿ ಸದರಿ 4 ಬ್ಯಾರೇಜುಗಳಡಿ ನಿಗಧಿತ ಸಾಮರ್ಥ್ಯಕ್ಕೆ ಅನುಗುಣವಾಗಿ ನೀರಿನ ಸಂಗ್ರಹಣೆಗೆ ಮತ್ತು ಬಳಕೆಗೆ ಕ್ರಮ ಜರುಗಿಸಲಾಗುತ್ತಿದೆ. |
| ಇ) | ಮಾಂಜ್ರಾ ಸರಣಿ ಬ್ಯಾರೇಜುಗಳಲ್ಲಿನ ಗೇಟು ಸಮಸ್ಯೆಯಿಂದಾಗಿ ನೀರು ಸೋರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಬಂದಿದ್ದಲ್ಲಿ ಯಾವ ಕ್ರಮಕೈಗೊಳ್ಳಲಾಗಿದೆ? (ವಿವರ ನೀಡುವುದು) | ಬ್ಯಾರೇಜುಗಳ ಮೇಲ್ಭಾಗ ಮತ್ತು ಕೆಳಭಾಗದಲ್ಲಿ ಸ್ಥಳೀಯ ಕಾರಣಗಳಿಂದಾಗಿ ರಿವರ್ ಟ್ರೇನಿಂಗ್ ಕಾರ್ಯಸಾಧುವಾಗಿರದ ಪ್ರಯುಕ್ತ ನೀರಿನ ಹರಿವು / ಸಂಗ್ರಹಣೆಯಲ್ಲಿ Unbalanced |

| ಕ್ರ ಸಂ | ಯೋಜನೆ ಹೆಸರು | ನೀರಿನ ಬಳಕೆ (ಟಿ.ಎಂ.ಸಿ) | ನಿರ್ಮಾಣದ ವೆಚ್ಚ (ರೂ.ಕೋಟಿ ಗಳಲ್ಲಿ) |
|---|---|---|---|
| 1 | ಜೀರಗಿಹಾಳ ಬ್ರಿಡ್ಜ್ ಕಂ ಬ್ಯಾರೇಜ್ | 0.78 | 57.84 |
| 2 | ಮಾಣಿಕೇಶ್ವರ ಬ್ರಿಡ್ಜ್ ಕಂ ಬ್ಯಾರೇಜ್ | 0.78 | 50.73 |
| 3 | ಹಾಲಹಳ್ಳಿ ಬ್ರಿಡ್ಜ್ ಕಂ ಬ್ಯಾರೇಜ್ | 2.46 | 104.27 |
| 4 | ಚಂದಾಪುರ ಬ್ರಿಡ್ಜ್ ಕಂ ಬ್ಯಾರೇಜ್ | 0.78 | 58.66 |
| | ಒಟ್ಟು | 4.80 | 271.50 |

| | | |
|---|---|---|
| | | condition ದಿಂದಾಗಿ ಸದರಿ 4 ಬ್ಯಾರೇಜುಗಳಡಿ ಅಳವಡಿಸಿರುವ ಸ್ವಯಂಚಾಲಿತ ಗೇಟುಗಳ ಸಂಪೂರ್ಣ ಸಮರ್ಪಕ ಕಾರ್ಯಕ್ಷಮತೆಯಲ್ಲಿ ಕಾರ್ಯನಿರ್ವಹಿಸುವ ಅನುಕೂಲ ಪರಿಸ್ಥಿತಿಯ ಅನಿಶ್ಚಿತತೆಯಿಂದಾಗಿ ಬ್ಯಾರೇಜುಗಳಡಿ ನಿಗಧಿತ ಸಾಮರ್ಥ್ಯಕ್ಕೆ ನೀರು ಸಂಗ್ರಹಣೆಯಲ್ಲಿ ತೊಂದರೆಯುಂಟಾಗಿರುತ್ತದೆ. ಈ ನಿಟ್ಟಿನಲ್ಲಿ ಬ್ಯಾರೇಜುಗಳಡಿ ಅಳವಡಿಸಿದ ಗೇಟುಗಳ ಸಮರ್ಪಕ ಕಾರ್ಯಕ್ಷಮತೆಯಲ್ಲಿ ಕಾರ್ಯನಿರ್ವಹಿಸಲು ಮತ್ತು ನಿರ್ವಹಣೆಗೆ ತಾಂತ್ರಿಕ ಅವಶ್ಯಕತೆಗಳಿಗನುಗುಣವಾಗಿ Low Level Friction Dampers ಅಳವಡಿಸುವ ಒಟ್ಟು ರೂ.7.07 ಕೋಟಿ ಗುತ್ತಿಗೆ ಮೊತ್ತದ ಎರಡು ಪ್ಯಾಕೇಜ್ ಕಾಮಗಾರಿಗಳನ್ನು ಮಾರ್ಚ 2018ರಲ್ಲಿ ಕೈಗೆತ್ತಿಕೊಂಡಿದ್ದು ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ.<br><br>ಪ್ರಸಕ್ತ ಸಾಲಿನಲ್ಲಿ ಸದರಿ Low Level Friction Dampers ಅಳವಡಿಕೆಯ ಕಾಮಗಾರಿಗಳನ್ನು ಆದ್ಯತೆ ಮೇರೆಗೆ ಪೂರ್ಣಗೊಳಿಸಿ 4 ಬ್ಯಾರೇಜುಗಳಡಿ ನಿಗಧಿತ ಸಾಮರ್ಥ್ಯಕ್ಕೆ ಅನುಗುಣವಾಗಿ ನೀರು ಸಂಗ್ರಹಿಸಲು ಹಾಗೂ ಉದ್ದೇಶಿತ ಬಳಕೆಗೆ ಬಳಸಲು ಉದ್ದೇಶಿಸಲಾಗಿದೆ. |

ಸಂಖ್ಯೆ: ಜಸಂಇ 22 ಡಬ್ಲ್ಯೂಬಿಎಂ 2018

(ಡಿ.ಕೆ.ಶಿವಕುಮಾರ್)
ಜಲ ಸಂಪನ್ಮೂಲ ಸಚಿವರು